# ಆಲಫ್ರೆಡ್ ಬಿನೆ (1857- 1911)

## ಇಂದಿರಾ ಜೈಪ್ರಕಾಶ್



***

ಬಿನೆ ಪ್ರಸಿದ್ಧನಾದ ಫ್ರೆಂಚ್ ಮನೋವಿಜ್ಞಾನಿ. ಇವನು ಫ್ರಾನ್ಸ್ ನಲ್ಲಿ ಪ್ರಯೋಗಾತ್ಮಕ ಮನೋವಿಜ್ಞಾನದ ವಿಕಾಸಕ್ಕೆ ಕಾರಣನಾಗಿದ್ದನು. ಮಕ್ಕಳ ಮಾನಸಿಕ ಸಾಮರ್ಥ್ಯವನ್ನು ವ್ಯವಸ್ಥಿತವಾಗಿ ಅಳೆಯಲು ಪ್ರಥಮ ಪರೀಕ್ಷೆಯನ್ನು ಇವನು ಸಿದ್ಧಪಡಿಸಿದ್ದು ಇವನನ್ನು **ಬುದ್ಧಿಶಕ್ತಿ ಮಾಪನಗಳ ಜನಕ (Father of Intelligence test)** ಎಂದು ಕರೆಯಲಾಗಿದೆ. ಹಿಂದೆ ಸಾರ್ಡಿನಿಯಾದ ಭಾಗವಾಗಿದ್ದು ಈಗಿನ ಫ್ರಾನ್ಸ್ ದೇಶದಲ್ಲಿರುವ ನೈಸ್ ಎಂಬಲ್ಲಿ ಹುಟ್ಟಿದನು. ಪ್ಯಾರಿಸ್‌ನಲ್ಲಿ ವಿದ್ಯಾಭ್ಯಾಸ ಮಾಡಿದ ಬಿನೆಯ ಶೈಕ್ಷಣಿಕ ಮತ್ತು ವೃತ್ತಿ ಜೀವನದ ಆರಂಭ ಆಶಾದಾಯಕವಾಗಿರಲಿಲ್ಲ. ಕಾನೂನು ಮತ್ತು ವೈದ್ಯಕೀಯ ಶಿಕ್ಷಣ ಪ್ರಾರಂಭಿಸಿ ಕೈಬಿಟ್ಟಿದ್ದ. ಮನೋವಿಜ್ಞಾನದಲ್ಲಿ ಆಸಕ್ತಿ ಹುಟ್ಟಿ ಮನೋಭೌತಿಕ ಪ್ರಯೋಗಗಳ ಬಗ್ಗೆ ಬರೆದು ಅವು ಅಸಿಂಧು ಎಂದು ಟೀಕೆಗೊಳಗಾಗಿದ್ದ. ಅಪಸಾಮಾನ್ಯ ವರ್ತನೆಯನ್ನು ಅಭ್ಯಸಿಸಲು ಆಗ ಪ್ರಸಿದ್ಧನಾಗಿದ್ದ ಶಾರ್ಕೋನ ಬಳಿ ಕೆಲಸಮಾಡಿದ. ಮೊದಲು ಶಾರ್ಕೋನ ವಿಧಾನಗಳನ್ನು ಪ್ರಶ್ನಿಸದೇ ಒಪ್ಪಿಕೊಂಡಿದ್ದ ಬಿನೆ ಅವನ್ನು ಸಮರ್ಥಿಸುತ್ತಿದ್ದ. ನಂತರ ಅವು ಅವೈಜ್ಞಾನಿಕ ಎಂದು ಸಾಬೀತಾದಾಗ ಭ್ರಮನಿರಸನಗೊಂಡಿದ್ದ. ಜಾನ್ ಸ್ಟುವರ್ಟ್ ಮಿಲ್ ಎಂಬುವನ ತತ್ವಗಳಿಂದ ಪ್ರಭಾವಿತನಾಗಿದ್ದ. ಮಿಲ್ ನ ಸಂಯೋಜನಾ ತತ್ವದಿಂದ ಎಲ್ಲಾ ವರ್ತನೆಯನ್ನೂ ವಿವರಿಸಬಹುದು ಎಂದು ಸಮರ್ಥಿಸಿ ಪುಸ್ತಕ ಬರೆದ. ನಂತರ ಅವನಿಗೆ ತನ್ನ ವಾದದಲ್ಲಿ ಹುರಳಿಲ್ಲ ಎಂದು ಬಹುಬೇಗ ಅರಿವಾಗಿತ್ತು.

1891 ರಲ್ಲಿ ಬಿನೆ ಸರ್ಬೋನ್ ನ ಶಾರೀರಿಕ ಮನೋವಿಜ್ಞಾನ ಪ್ರಯೋಗಾಲಯದಲ್ಲಿ ಕೆಲಸ ಮಾಡತೊಡಗಿದ. 1884ರಲ್ಲಿ ಅವನು ಲಾರ್ ಬಾಲ್ಬಿಯಾನಿ ಎಂಬಾಕೆಯನ್ನು ಮದುವೆಯಾಗಿ ಅವರಿಗೆ ಇಬ್ಬರು ಹೆಣ್ಣುಮಕ್ಕಳಾದರು. ಬಿನೆ ತನ್ನ ಮಕ್ಕಳ ವಿಕಾಸವನ್ನು ಆಭ್ಯಸಿಸಲು ಅನೇಕ ಪರೀಕ್ಷೆಗಳನ್ನು ಬಳಸಿದ. ಅವನ ಸೂಕ್ಷ್ಮ ಅವಲೋಕನಗಳು 'ಬುದ್ಧಿಶಕ್ತಿಯ ಪ್ರಾಯೋಗಿಕ ಅಧ್ಯಯನ' ಎಂದು 1903ರಲ್ಲಿ ಪ್ರಕಟವಾಯಿತು. ಇದು ಈ ವಿಷಯದಲ್ಲಿ ಮಹತ್ವಪೂರ್ಣ ಕೃತಿಯಾಗಿತ್ತು. ಫ್ರಾನ್ಸ್ ನಲ್ಲಿ ಎಲ್ಲಾ ಮಕ್ಕಳನ್ನೂ ಶಾಲೆಗೆ ಸೇರಿಸಬೇಕೆಂಬ ಕಾಯಿದೆ ಇತ್ತು. ಕಲಿಯುವ ಸಮಸ್ಯೆ ಇದ್ದವರಿಗೆ ಹೆಚ್ಚು ಸಹಾಯ ನೀಡಲು ಸಾಧ್ಯವಾಗುವಂತೆ ಅವರನ್ನು ಸಾಮಾನ್ಯ ಮಕ್ಕಳಿಂದ ಬೇರ್ಪಡಿಸುವ ಅಗತ್ಯವಿತ್ತು. ಸರ್ಕಾರ

ಬಿನೆಯನ್ನು ಇಂತಹ ಪರೀಕ್ಷೆಯನ್ನು ಸಿದ್ಧಪಡಿಸುವಂತೆ ಕೋರಿತು. ತನ್ನ ಸಹಾಯಕನಾಗಿದ್ದ ಥಿಯೋಡರ್ ಸೈಮನ್ ಜೊತೆಗೆ ಇವನು ತಯಾರಿಸಿದ ಮೊದಲ ಮಾಪನ 1905 ರಲ್ಲಿ 'ಬಿನೆ-ಸೈಮನ್ ಬುದ್ಧಿಶಕ್ತಿ ಪರೀಕ್ಷೆ (Binet -Simon Intelligence test)' ಎಂದು ಹೊರಬಿತ್ತು. ಇವನು ನೀಡಿದ ಮಾನಸಿಕ ವಯಸ್ಸು (Mental Age), ಬುದ್ಧಿಶಕ್ತಿಲಬ್ಧ (I. Q.) ಸಂಕಲ್ಪನೆಗಳು ಬುದ್ಧಿಶಕ್ತಿ ಮಾಪನದ ದಿಶೆಯನ್ನೇ ಬದಲಿಸಿತು.

ಬಿನೆ ಯಾವಾಗಲೂ ತನ್ನ ಕೆಲಸವನ್ನು ಪ್ರಶ್ನಿಸಿಕೊಳ್ಳುತ್ತಿದ್ದ. ತನ್ನ ಪ್ರಥಮ ಪರೀಕ್ಷೆಗಳ ಕೊರತೆಗಳು ಬಿನೆಗೆ ತಿಳಿದಿದ್ದು ಅವನ್ನು ಹಲವು ಬಾರಿ ಪರಿಷ್ಕರಿಸಿದ್ದ. ಅಮೆರಿಕೆಯ ಸ್ಟಾನ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಲ್ಯುಯಿಸ್ ಟರ್ಮನ್ ಇವನ ಪರೀಕ್ಷೆಯನ್ನಾಧರಿಸಿ ತಯಾರಿಸಿದ್ದು 'ಸ್ಟಾನ್‌ಫರ್ಡ್-ಬಿನೆ ಪರೀಕ್ಷೆ (Stanford-Binet intelligence test)' ಎಂದೇ ಪ್ರಸಿದ್ಧವಾಯಿತು ಅಮೆರಿಕೆಯಲ್ಲಿ ಬುದ್ಧಿಶಕ್ತಿ ಮಾಪನ ಒಂದು ಬೃಹತ್ ಉದ್ಯಮ (big industry)ವಾಗಿ ಬಹುಬೇಗ ಬೆಳೆಯಿತು. ಬಿನೆಯ ಹೆಸರು ಬುದ್ಧಿಶಕ್ತಿ ಪರೀಕ್ಷೆಯ ಜೊತೆ ಜೋಡಿಸಲ್ಪಟ್ಟಿದ್ದರೂ, ಅವನಿಗೆ ಅನೇಕ ಇತರ ಆಸಕ್ತಿಗಳಿದ್ದವು. ಬಿನೆ ತನ್ನ ಜೀವಿತಕಾಲದಲ್ಲಿ 200ಕ್ಕೂ ಹೆಚ್ಚು ಪುಸ್ತಕಗಳು, ಲೇಖನಗಳನ್ನು ಬರೆದಿದ್ದ. ಅವು ಇಂದಿನ ಪ್ರಾಯೋಗಿಕ, ಶೈಕ್ಷಣಿಕ, ವಿಕಾಸಾತ್ಮಕ ಮತ್ತು ಸಾಮಾಜಿಕ ಮನೋವಿಜ್ಞಾನದ ವಿಷಯಗಳು ಎನ್ನಬಹುದು.

ಬಿನೆಯ ವಿಚಾರಗಳು ಶಿಶು ಮನೋವಿಜ್ಞಾನದಲ್ಲಿ ಹೆಸರುಮಾಡಿದ ಪಿಯಾಜೆಯನ್ನು ಪ್ರಭಾವಿಸಿರಬಹುದು ಎನ್ನಲಾಗಿದೆ. ಪಿಯಾಜೆ ಕೆಲಕಾಲ ಸೈಮನ್ ಜೊತೆಗೆ ಕೆಲಸಮಾಡಿದ್ದ. ಫ್ರಾಯ್ಡನಿಗಿಂತಾ ಮೊದಲೇ ಲೈಂಗಿಕ ವರ್ತನೆಯನ್ನು ಬಿನೆ ಅಧ್ಯಯನ ಮಾಡಿದ್ದ ಎನ್ನಲಾಗಿದೆ. ಆಂದ್ರೆ ದ ಲಾರ್ಡ್ ಎಂಬುವನೊಡನೆ ಬಿನೆ ರಂಗಭೂಮಿಗೆಂದು ನಾಟಕಗಳನ್ನು ರಚಿಸಿರುವುದು ಅನೇಕರಿಗೆ ತಿಳಿಯದ ವಿಷಯ. ಚೆಸ್ ಆಟಕ್ಕೆ ಬೇಕಿದ್ದ ಮಾನಸಿಕ ಸಾಮರ್ಥ್ಯಗಳನ್ನು ತಿಳಿದುಕೊಳ್ಳಲು ಇವನು ಕಣ್ಣಿಗೆ ಪಟ್ಟಿ ಕಟ್ಟಿಕೊಂಡು ಚೆಸ್ ಆಡುವವರನ್ನು ಪ್ರಯೋಗಕ್ಕೆ ಒಳಪಡಿಸಿದ್ದ. ಇವನೂ, ಸೈಮನ್ ಜೊತೆಗೂಡಿ ವಿದ್ವತ್ ಪತ್ರಿಕೆಯೊಂದನ್ನು ಹೊರತರುತ್ತಿದ್ದರು.

ಫ್ರಾನ್ಸನ್ನು ಬಿಟ್ಟು ಬೇರೆಲ್ಲೂ ಹೋಗಿರದಿದ್ದ ಬಿನೆಗೆ ತನ್ನ ಪರೀಕ್ಷೆಗಳು ಬೇರೆ ದೇಶಗಳಲ್ಲಿ ಹೇಗೆ ಉಪಯೋಗವಾಗುತ್ತಿವೆ ಎಂಬುದರ ಅರಿವಿರಲಿಲ್ಲ. ಬುದ್ಧಿಶಕ್ತಿಯನ್ನು ಒಂದು ಸರಳ ಪರೀಕ್ಷೆಯಿಂದ ಅಳೆಯಲಾಗುವುದಿಲ್ಲ, ಎಲ್ಲಾ ಮಕ್ಕಳೂ ಒಂದೇ ವೇಗ ಮತ್ತು ವಿಧದಲ್ಲಿ ಕಲಿಯುವುದಿಲ್ಲ ಎಂದು ಎಚ್ಚರಿಸಿದ್ದ. ಆದರೂ ಅಮೆರಿಕೆ ಮತ್ತು ಬ್ರಿಟನ್‌ನಲ್ಲಿ ವರ್ಣಬೇಧ ನೀತಿಯನ್ನು ಸಮರ್ಥಿಸಲು ಇಂತಹ ಪರೀಕ್ಷೆಗಳನ್ನು ಬಳಸಲಾಗಿತ್ತು. ಅಂತಹ ವಿವಾದಗಳು ಏನೇ ಇದ್ದರೂ ಬಿನೆ ಮನೋಮಾಪನಗಳ ಒಂದು ಸಂಪ್ರದಾಯಕ್ಕೆ ಅಡಿಪಾಯ ಹಾಕಿದ ಎನ್ನುವುದು ನಿರ್ವಿವಾದ. ಇವನ ಗೌರವಾರ್ಥ ಪ್ಯಾರಿಸ್‌ನ ಮಕ್ಕಳ ಅಧ್ಯಯನ ಸಂಸ್ಥೆ 1899 ರಲ್ಲಿ ತನ್ನ ಹೆಸರನ್ನು ಆಲಫ್ರೆಡ್ ಬಿನೆ ಸೊಸೈಟಿ (Alfred Binet Society) ಎಂದು ಬದಲಾಯಿಸಿತು. ಇಪ್ಪತ್ತನೆಯ ಶತಮಾನದ ಅತ್ಯಂತ ಮಹತ್ವಪೂರ್ಣ ಅನ್ವೇಷಣೆಗಳಲ್ಲಿ ಇವನ ಬುದ್ಧಿಶಕ್ತಿ ಪರೀಕ್ಷೆ ಸೇರಿಸಲ್ಪಟ್ಟಿದೆ.

***